ಡಾ|| ಎ. ಕೆ. ಶಾಸ್ತ್ರಿ

# ಶೃಂಗೇರಿ ಮಠ ಮತ್ತು ಕೆಳದಿ ಇಮ್ಮಡಿ ಬಸವಪ್ಪನಾಯಕರ ಸಂಬಂಧ

ಸುಮಾರು ೧೨೦೦ ವರ್ಷಗಳ ಹಿಂದೆ ಆದಿಶಂಕರಾಚಾರ್ಯರು ದಕ್ಷಿಣದ ಶೃಂಗೇರಿ, ಪಶ್ಚಿಮದ ದ್ವಾರಕೆ, ಉತ್ತರದ ಬದರಿ ಮತ್ತು ಪೂರ್ವದ ಜಗನ್ನಾಥಪುರಿ ಈ ನಾಲ್ಕು ಸ್ಥಳಗಳಲ್ಲಿ ಮಠಗಳನ್ನು ಸ್ಥಾಪಿಸಿ ಧಾರ್ಮಿಕವಾಗಿ ಹಾಗೂ ಆಧ್ಯಾತ್ಮಿಕವಾಗಿ ಛಿದ್ರಗೊಂಡ ಭಾರತದಲ್ಲಿ ಐಕ್ಯತೆಯನ್ನುಂಟು ಮಾಡಲು ಶ್ರಮಿಸಿದರು. ಹನ್ನೆರಡು ಶತಮಾನಗಳು ಉರುಳಿದರೂ ಶೃಂಗೇರಿ ಜಗದ್ಗುರು ಪರಂಪರೆಯು ಇಂದಿಗೂ ಅವಿಚ್ಛಿನ್ನವಾಗಿ ಸಾಗಿ ಬಂದಿರುವುದು ಐತಿಹಾಸಿಕ ಸತ್ಯ. ಐತಿಹಾಸಿಕ ಪುರಾವೆಗಳ ಅಭಾವದಿಂದಾಗಿ ವಿಜಯನಗರ ಸ್ಥಾಪನೆಯ ಕಾಲದವರೆಗಿನ ಶ್ರೀಮಠದ ಇತಿಹಾಸವು ಅಸ್ಪಷ್ಟವೆಂದೇ ಹೇಳಬೇಕು. ವಿಜಯನಗರದ ಅರಸುಗಳು ಶೃಂಗೇರಿ ಮಠಕ್ಕೆ ವಿಶೇಷ ದಾನ ಧರ್ಮಗಳನ್ನು ಮಾಡಿ ಗೌರವಿಸಿದ್ದರಿಂದ ಅದೊಂದು ಧರ್ಮಸಂಸ್ಥಾನವಾಗಿ ಪರಿವರ್ತನೆಗೊಂಡಿತು. ವಿಜಯನಗರದ ಪತನದ ನಂತರವೂ ಕೂಡ ಕರ್ನಾಟಕದ ಅರಸುಗಳು ಮತ್ತು ಭಾರತದ ಹಲವಾರು ಸ್ಥಳಗಳ ಅರಸುಗಳು ಶೃಂಗೇರಿ ಮಠಕ್ಕೆ ದಾನ ಧರ್ಮಗಳನ್ನು ಮಾಡಿ ಮತ್ತು ಬಿರುದು ಬಾವಲಿಗಳನ್ನು ನೀಡಿ ಜಗದ್ಗುರುಗಳನ್ನು ಗೌರವಿಸಿದರು.

ದಕ್ಷಿಣದಲ್ಲಿಯೇ ಅತ್ಯಂತ ಪ್ರಬಲವಾದ ವಿಜಯನಗರ ಸಾಮ್ರಾಜ್ಯವು ಕ್ರಿ.ಶ. ೧೫೬೫ರಲ್ಲಿ ಕುಸಿದ ನಂತರ ಸ್ವಾಭಾವಿಕವಾಗಿ, ಕರ್ನಾಟಕದಲ್ಲಿ ಕೆಲಕಾಲ ಅರಾಜಕತೆ ತಲೆದೋರಿತು. ದಕ್ಷಿಣದ ರಾಜ್ಯಗಳನ್ನೆಲ್ಲ ಒಂದುಗೂಡಿಸುವ ಸಾಮರ್ಥ್ಯ ಯಾವ ಸಾಮಂತರಿಗೂ ಇರಲಿಲ್ಲ. ರಾಜಕೀಯ ಅಸ್ಥಿರತೆಯಿಂದಾಗಿ ಶೃಂಗೇರಿ ಮಠದ ಘನತೆಯೂ ತಾತ್ಕಾಲಿಕವಾಗಿ ಕುಂಠಿತಗೊಂಡಿತು. ಇಂಥ ಸ್ಥಿತಿಯಲ್ಲಿ ಶೃಂಗೇರಿ ಮಠವು ತನ್ನ ಕೆಲವು ಚರಾಚರ ಆಸ್ತಿಗಳನ್ನೂ ಕಳೆದುಕೊಂಡಿತು. ಹೀಗಿರುವಾಗ, ಸಾಮಂತರಲ್ಲಿ ಪ್ರಬಲರೆನಿಸಿದ ಕೆಳದಿಯ ನಾಯಕರು ಕರ್ನಾಟಕದ ಇತಿಹಾಸದಲ್ಲಿ ತಮ್ಮದೇ ಆದ ವಿಶಿಷ್ಟ ಸ್ಥಾನವನ್ನು ಕಲ್ಪಿಸಿಕೊಂಡರು. ಈಗ ಕೆಳದಿಯು ಶಿವಮೊಗ್ಗ ಜಿಲ್ಲೆಯ ಸಾಗರ ತಾಲೂಕಿನ ಒಂದು ಸಣ್ಣ ಊರು. ಆದರೆ ಅದು ಒಂದು ಕಾಲದಲ್ಲಿ ಕೆಳದಿನೃಪರ ರಾಜಧಾನಿಯಾಗಿತ್ತು. ಕೆಳದಿನೃಪರು ಸುಮಾರು ಎರಡೂವರೆ ಶತಮಾನಗಳ ಕಾಲ (ಕ್ರಿ. ಶ. ೧೪೯೯–೧೭೬೩) ಕರ್ನಾಟಕದ ಮಧ್ಯ–ಪಶ್ಚಿಮ ಭಾಗದ ಒಡೆಯರಾಗಿದ್ದರು. ಕೆಳದಿಯ ಅರಸರು ವೀರಶೈವ ಮತಾನುಯಾಯಿಗಳಾಗಿದ್ದರೂ ಅದ್ವೈತ ಪೀಠದ ಶೃಂಗೇರಿ ಜಗದ್ಗುರುಗಳನ್ನು ಅತ್ಯಂತ ಗೌರವದಿಂದ ಕಾಣುತ್ತಿದ್ದರೆಂಬುದಕ್ಕೆ ಸಾಕಷ್ಟು ಐತಿಹಾಸಿಕ ಪುರಾವೆಗಳಿವೆ.[1]

ಕೆಳದಿ ಅರಸುಗಳು ಮುಸಲ್ಮಾನರ ದಾಳಿಗಳನ್ನು ಎದುರಿಸಲು ಹಾಗೂ ಕೆಲವೊಮ್ಮೆ ಅವುಗಳಿಂದ ತಪ್ಪಿಸಿಕೊಳ್ಳಲೆಂದು, ಕಾಲಕ್ಕನುಸರಿಸಿ, ಕ್ರಮವಾಗಿ, ಕೆಳದಿ, ಇಕ್ಕೇರಿ, ಬಿದನೂರು ಮತ್ತು ಭುವನಗಿರಿ ದುರ್ಗಗಳೆಂಬ

1 ಶಿಲಾ ಹಾಗೂ ತಾಮ್ರ ಶಾಸನಗಳು, ಶೃಂಗೇರಿ ಮಠದಲ್ಲಿರುವ ಕಾಗದಪತ್ರಗಳು ಮತ್ತು ಕಡತಗಳು ; ಗುರುವಂಶಕಾವ್ಯ, ಕೆಳದಿನೃಪವಿಜಯಂ, ಶಿವರತ್ನಾಕರ ಮೊದಲಾದ ಗ್ರಂಥಗಳು

ರಾಜಧಾನಿಗಳಿಂದ ರಾಜ್ಯವನ್ನಾಳಿದರು. ವಿಜಯನಗರದ ಚಕ್ರವರ್ತಿಗಳಂತೆ ಇವರೂ ಕೂಡ ಶೃಂಗೇರಿ ಮಠಕ್ಕೆ ಹಲವಾರು ಸಲ ಭೇಟಿಕೊಟ್ಟು, ಭೂಮಿ ಹಾಗೂ ವಸ್ತು ಒಡವೆಗಳನ್ನು ದಾನವಮಾಡಿ, ಜಗದ್ಗುರುಗಳ ಆಶೀರ್ವಾದ ಪಡೆದರು. ಅದೇ ರೀತಿ ಹಲವಾರು ಸಂದರ್ಭಗಳಲ್ಲಿ ಶ್ರೀಗಳವರನ್ನೂ ತಮ್ಮ ಆಸ್ಥಾನಕ್ಕೆ ಬರಮಾಡಿಕೊಂಡು ಸಂಭ್ರಮದ ಸ್ವಾಗತ ನೀಡಿದರು. ಶ್ರೀಮಠವು ಆಂತರಿಕ ಇಲ್ಲವೆ ಬಾಹ್ಯ ತೊಂದರೆಯಲ್ಲಿ ಸಿಲುಕಿದಾಗ, ನಾಯಕರು ಮಠಕ್ಕೆ ಸಕಲ ಸಹಾಯ ನೀಡಿ ಅದನ್ನು ರಕ್ಷಿಸಿದರು. ಜಗದ್ಗುರುಗಳ ವಿಜಯಯಾತ್ರೆ, ಇಲ್ಲವೆ ತೀರ್ಥಯಾತ್ರಾ ಸಮಯದಲ್ಲಿ ಅವರ ಪರಿವಾರಕ್ಕೆ ಬೇಕಾದ ಎಲ್ಲ ಅನುಕೂಲತೆಗಳನ್ನೂ ಒದಗಿಸಿಕೊಟ್ಟರು.

ಶೃಂಗೇರಿ ಮಠದೊಂದಿಗೆ ವಿಜಯನಗರದ ಸಮ್ರಾಟರು ಇರಿಸಿಕೊಂಡ ಸಂಬಂಧವನ್ನರಿಯಲು ಶಿಲಾ ಮತ್ತು ತಾಮ್ರ ಶಾಸನಗಳೆಷ್ಟು ಮಹತ್ವವೋ, ತುಲನಾತ್ಮಕವಾಗಿ, ಶೃಂಗೇರಿ ಮತ್ತು ಕೆಳದಿ ನಡುವಿನ ಸಂಬಂಧವನ್ನರಿಯಲು ಅವು ಅಷ್ಟೊಂದು ಮಹತ್ವವಲ್ಲ. ಹದಿನಾರನೆಯ ಶತಮಾನದ ಕೊನೆಯಲ್ಲಿ ಕಡತಗಳು[2] ಮತ್ತು ಕೈಯಿಂದ ಸಿದ್ಧಪಡಿಸಿದ ದಪ್ಪನೆಯ ಕಾಗದಗಳು[3] ಬಳಕೆಯಲ್ಲಿ ಬಂದವು. ಗುರುವಂಶಕಾವ್ಯ ; ಕೆಳದಿನೃಪ ವಿಜಯಂ ಮತ್ತು ಶಿವತತ್ವರತ್ನಾಕರ ; ಪೀಟ್ರೊಡೆಲ್ಲವಲ್ಲೆ ಮತ್ತು ಪೀಟರ್‌ಮುಂಡಿಯುವರ ಕಥನಗಳು, ಈ ದಿಶೆಯಲ್ಲಿ ಉಪಯುಕ್ತ ಗ್ರಂಥಗಳು, ಪೇಶ್ವಾದಫ್ತರದ ಕಾಗದಪತ್ರಗಳ ಅಧ್ಯಯನ ಪ್ರಸ್ತುತ ವಿಷಯದ ಮೇಲೆ ವಿಶೇಷ ಬೆಳಕು ಬೀರುವುದರಲ್ಲಿ ಸಂಶಯವಿಲ್ಲ. ಪ್ರಸ್ತುತ ಲೇಖನವು ಶೃಂಗೇರಿ ಮಠದಲ್ಲಿ ದೊರೆತ ಕಡತಗಳಲ್ಲಿಯ ದಾಖಲೆಗಳ ಮೇಲೆ ಆಧಾರವಾಗಿರುವುದರಿಂದ ಆ ದಾಖಲೆಗಳ[4] ಸ್ಥೂಲ ಪರಿಚಯವನ್ನು ಇಲ್ಲಿ ಮಾಡಿಕೊಡಲಾಗಿದೆ.

ಮೊದಲನೆಯ ಬಸವಪ್ಪನಾಯಕನ ಮೊಮ್ಮಗ ಮತ್ತು ವೀರಭದ್ರನ ಮಗನೇ ಇಮ್ಮಡಿ ಬಸವಪ್ಪನಾಯಕ (ಕ್ರಿ.ಶ. ೧೭೩೯–೧೭೫೪). ಶೃಂಗೇರಿ ಮಠದಲ್ಲಿ ಕ್ರಮವಾಗಿ ಪೀಠಾರೂಢರಾದ ದ್ವಿತೀಯ ಶ್ರೀ ಸಚ್ಚಿದಾನಂದ ಭಾರತೀ (ಕ್ರಿ.ಶ. ೧೭೦೫–೧೭೪೧) ಹಾಗೂ ಪ್ರಥಮ ಶ್ರೀ ಅಭಿನವ ಸಚ್ಚಿದಾನಂದ ಭಾರತೀಸ್ವಾಮಿಗಳು (ಕ್ರಿ.ಶ. ೧೭೪೧–೧೭೬೭) ಇಮ್ಮಡಿ ಬಸವಪ್ಪನಾಯಕರ ಸಮಕಾಲೀನರು. ಇಮ್ಮಡಿ ಬಸವಪ್ಪನಾಯಕರ ಕಾಲ ಶೃಂಗೇರಿ ಮತ್ತು ಕೆಳದಿಯ (ಬಿದನೂರು) ನಡುವಿನ ಸಂಪರ್ಕವನ್ನರಿಯಲು ಮಠದಲ್ಲಿಯ ಕಡತಗಳು ಬಹಳೇ ಉಪಯುಕ್ತವಾಗಿವೆ.

ದ್ವಿತೀಯ ಶ್ರೀ ಸಚ್ಚಿದಾನಂದ ಭಾರತೀ ಸ್ವಾಮಿಗಳಿಗೆ ದೇಹದ ಸೌಖ್ಯವಿಲ್ಲವೆಂದು ತಿಳಿದಾಗ, ನಾಯಕರು ಶ್ರೀಗಳಿಗೆ ಸಕ್ಕರೆ, ಕಲ್ಲುಸಕ್ಕರೆ, ದ್ರಾಕ್ಷಿ ಮುಂತಾದವುಗಳನ್ನು ಕಳುಹಿಸಿ, ಗುರುಗಳ ಆರೋಗ್ಯದ ಸಮಾಚಾರವನ್ನು ತಿಳಿಯಲು ಎಷ್ಟೊಂದು ಉತ್ಸುಕರಾಗಿದ್ದರೆಂಬುದು ಈ ಕೆಳಗಿನ ಬಿನ್ನವತ್ತಳೆಯಿಂದ ವಿದಿತವಾಗುತ್ತದೆ.[5]

---

2 ಸಂಪುಟಗಳು : ೧೩, ೧೯. ೨೦, ೨೫, ೨೭, ೪೫, ೪೭, ೫೦, ೫೧, ೫೩, ೬೬, ೭೨, ೮೯, ೧೦೧, ೧೧೩, ೧೩೪, ೧೪೧, ೧೪೭, ೧೫೪, ೧೫೫, ೧೬೦, ೧೬೭, ೧೮೪, ೧೮೯, ೧೯೮.

ಶೃಂಗೇರಿ ಮಠದ ಕಡತಗಳ ವಿಷಯ ಸೂಚಿಯನ್ನು ೧೯೭೪ರಲ್ಲಿ ಪ್ರಸ್ತುತ ಲೇಖನದ ಲೇಖಕರು ಕರ್ನಾಟಕ ರಾಜ್ಯ ಪತ್ರಾಗಾರ ಶಾಖೆಗೆ ಸಾದರಪಡಿಸಿದ್ದಾರೆ. ನಿರೂಪ ಮತ್ತು ಬಿನ್ನವತ್ತಳೆಗಳನ್ನೊಳಗೊಂಡ ೨೦೫ ಕಡತ ಸಂಪುಟಗಳ ಸೂಕ್ಷ್ಮಚಿತ್ರೀಕರಣವೂ ಅದೇ ವರ್ಷದಲ್ಲಿ ಪೂರ್ತಿಯಾಗಿದೆ.

3 ಪ್ರಸ್ತುತ ಲೇಖನದ ಲೇಖಕರು ೧೯೮೮ರಲ್ಲಿ ಕರ್ನಾಟಕ ರಾಜ್ಯ ಪತ್ರಾಗಾರ ಶಾಖೆಗೆ ಶೃಂಗೇರಿ ಮಠದ ಕನ್ನಡದಲ್ಲಿಯ ದಾಖಲೆಗಳನ್ನು ಸಂಗ್ರಹಿಸಿ, ಪರಿಶೀಲಿಸಿ *Catalogue of the Kannada Records in the Archives of the Sringeri Matha, Vol. 1* ಎಂಬ ಹೊತ್ತಗೆಯನ್ನು ಸಾದರಪಡಿಸಿದ್ದಾರೆ.

4 ಕಡತ ಸಂಪುಟ ೨೦, ದಾಖಲೆ ೬೬, ೭೬, ೭೮ ; ಕ. ಸಂ. ೫೧, ದಾ. ೨೧, ೪೨, ೪೩ ; ಕೆಲವು ದಾಖಲೆಗಳು ಪುನರಾವರ್ತನೆಗೊಂಡಿದ್ದರಿಂದ ಒಟ್ಟು ದಾಖಲೆಗಳ ಸಂಖ್ಯೆ ೪.

5 ಕ. ಸಂ. ೨೦, ದಾ. ೬೬ ಮತ್ತು ಕ. ಸಂ. ೫೧, ದಾ. ೪೨ ; ರೌದ್ರಿ ಸಂವತ್ಸರದ ಈ ಬಿನ್ನವತ್ತಳೆಯು ಶ. ವ. ೧೬೬೨ (ಕ್ರಿ. ಶ. ೧೭೪೦)ಕ್ಕೆ ಸೇರಿದ್ದೆಂಬುದು ಇವೇ ಸಂಪುಟಗಳಲ್ಲಿಯ ಇನ್ನುಳಿದ ದಾಖಲೆಗಳಿಂದ ತಿಳಿದುಬರುತ್ತದೆ.

ಃ ಅರಮನೆಯಿಂದ ಬಸವಪ್ಪನಾಯಕರೈಯಾನವರು ಬರದ ಕಾಗದ ಬಿಂನವತ್ತಳೆ ।
೦ ಪ್ರತಿ ।
೦ ಶ್ರೀಮತ್ಪರಮಹಂಸ ಪರಿವ್ರಾಜಕಾಚಾರ್ಯ್ಯವರ್ಯ್ಯ ಪದವಾಕ್ಯಪ್ರಮಾಣ ಪಾರಾ ।
೦ ವಾರ ಪಾರಿಣ ಯಮನಿಯಮಾದ್ಯಷ್ಟಾಂಗ ಯೋಗ ನಿರುತರಾದ ಶೃಂಗೆರಿ ಶ್ರೀಸಚಿದಾ
೦ ನಂದ ಭಾರತಿ ಸ್ವಾಮಿಗಳವರಿಗೆ । ಕೆಳದಿ ಬಸವಪ್ಪನಾಯಕರೂ ಮಾಡುವ ಬಿಂನಹಾ ।
೦ ನಿಂಮ ಶರಿರಕ್ಕೆ ಸ್ವಲ್ಪ ಆಲಸ್ಯವಾಗಿ ಆದೆಯಂತ ಕೆಳಿದೆಉ । ಸಾಂಪ್ರತ ಸಖರೆ ।
೦ ಕಲುಸಖರೆ ದ್ರಾಕ್ಷೆ ಹಂಣು ಮುಂತ್ತಾದನು ಕಟ್ಟಿಸಿ ಆ ವಿವರಕ್ಕೆ ಉಳುವರಿ ಬರಸಿ ।
೦ ಕಳುಹಿಸಿ ಅದೆ ತೆಗೆದುಕೊಂಡು ದೆಹಸ್ತಿ ಹೆಗೆ ಅದೆ ಯಂಬುದಕೆ ಬರಸಿ ಕಳುಹಿಸು ।
೦ ವ ಹಾಗೆ । ಮಾಡಿಸುವುದು । ಮಹಾನುಭಾವರು ತಪ್ಪೋನಿಷ್ಠರಾಗಿಹಲ್ಲಿ ವಿಶೆಷ ಬರಸಿ ಕಳು ।
೦ ಹಿಸುವಂಥಾದ್ದೆದೆಯಾಗಿ ಯಂದು ನಾಗರದಲು । ಬಿಂನಹಾ ಯಂದು ಬರದ ಬಿಂನ ।
೦ ತ್ತಳೆ ೧
೦ ರಉದ್ರಿ ಸಂವತ್ಸರದ ಮಾಘ ಬ ೧೧ಲ್ಲು ಬರದಲ್ಲಿ ಆರ್ರಿಕೆಯಾಗಿ ಬೊಕಸ

**ಚಾತುರ್ಮಾಸ್ಸದ ಸಂಬಂಧ ಶ್ರೀ ಸಚ್ಚಿದಾನಂದ ಭಾರತಿಗಳಿಗೆ ಸೂರಾಪಂಡಿತನ ಮುಖಾಂತರ ಬಸವಪ್ಪನಾಯಕರು ಉಡುಗೊರೆ ಕಳುಹಿಸಿದ ವೃತ್ತಾಂತವು** ಇನ್ನೊಂದು ಬಿನ್ನವತ್ತಳೆಯಿಂದ ತಿಳಿದುಬರುತ್ತದೆ, ಬಿನ್ನವತ್ತಳೆಯ ಪಾಠವು ಇಂತಿದೆ :

ಃ ಅರಮನೆಯಿಂದ । ಉಡುಗೊರೆ ಕಳುಹಿದಕ್ಕೆ ಹಾಬ್ಬಯ ಪಂಡಿತರ ಮಗನು ತಂದ ಕಾಗದ ಬಿಂನವತ್ತಳೆ।
೦ ಪ್ರತಿ ।
೦ ಶ್ರೀಮತ್ಪರಮಹಂಸ ಪರಿವ್ರಾಜಕಾಚಾರ್ಯ್ಯ ಪದವಾಕ್ಯ ಪ್ರಮಾಣ ಪಾರಾವಾರ ಪಾರಿಣ ।
೦ ಯಮನಿಯಮದ್ಯಾಷ್ಟಾಂಗ ಯೋಗನಿರುತರಾದ । ಶ್ರಿಂಗೆರಿ ಶ್ರೀ ಸಚ್ಚಿದಾನಂದ ಭಾರತಿ ಸ್ವಾಮಿ ।
೦ ಗಳವರಿಗೆ । ಕೆಳದಿ ಬಸವಪ್ಪನಾಯಕರೂ ಮಾಡುವ ಬಿಂನಹಾ ಸಾಂಪ್ರತ್ತ । ಚಾತುರ್ಮಾಸಿಯ ।
೦ ಸಂಬಂಧ । ಉಡುಗೊರೆಯನು ಕಟ್ಟಿಸಿ । ಸೂರಾಪಂಡಿತನ ಸಂಗಡ ಕಳುಹಿಸಿದೆವೆ । ತ್ತೆಗೆದುಕೊಂಬ ।
೦ ಹಾಗೆ ಮಾಡುವುದು । ನಿಉ ಮಹಾನುಭಾವರು ತಪ್ಪೋನಿಷ್ಠರಾಗಿಹಲ್ಲಿ । ೧ । ಮುಖಾಂತ್ರ ವಿಶೆ ।
೦ ಷ ಬರಸುವಂಥಾದೆನದೆಯಾಗಿ । ಯಂದು । ನಾಗರವಲ್ಲು । ಬಿಂನಹವೆಂದು । ಬರದ ಬಿಂನ್ನವತ್ತಳೆ ।
೦ ಕಾಗದ ೧
ಃ ಯಿದೆ ರಿತ್ತಿ ಉಡುಗೊರೆ ಕಳುಹಿದೆ ಯಂದು । ಬೆರೆ ಬರದ ಕಾಗದ ಬಿಂನವತ್ತಳೆ ೧ ಮದುವೆ ಸಂಬಂಧ
೦ ಉಭಯಂ। ಕಾಗದ ೨ ರಉದ್ರಿ ಸಂ । ಕಾರ್ತ್ತಿಕ। ಶು ೧೫ಲು । ಸೂರಾಪಂಡಿತ ತಂದಲ್ಲಿ। ಬೊಕಸ ।[6]

ಶ್ರೀ ಸಚ್ಚಿದಾನಂದಭಾರತಿಗಳು ಬಸವಪ್ಪನಾಯಕರಿಗೆ ಬರೆದ ಆಶೀರ್ವಾದ ಪತ್ರಿಕೆಯ ಪ್ರತಿಯು ಕಡತಗಳಲ್ಲಿ ದೊರೆತಿದೆ.[7] ಪಾಠ ಇಂತಿದೆ :

---

6 ಕ. ಸಂ. ೫೧, ದಾ. ೨೧ ; ರೌದ್ರಿ ಸಂವತ್ಸರದ ಈ ಬಿನ್ನವತ್ತಳೆಯೂ ಕ್ರಿ.ಶ. ೧೭೪೦ರದ್ದು.

7 ಕ. ಸಂ. ೨೨, ದಾ. ೭೬ ಮತ್ತು ಕ. ಸಂ. ೫೧, ದಾ. ೪೩

ಃ ಶ್ರೀ ಸಚ್ಚಿದಾನಂದ ಭಾರತಿ ಸ್ವಾಮಿಂಗಳವರಿಗೆ । ಶರಿರಕೆ ।
೦ ಶ್ರಮಂವಾದರಿಂದ । ದುಂರ್ಮತಿ ಸಂವತ್ಸರದ ಜೆಷ್ಠ ಬ ೨ ಯಂ।
೦ ಶುಕ್ರವಾರ । ವಂಊರು ತಾಸಿನಾಗ । ಅವಧಾನದ ತ್ತಿರುಂಮಲಭಟ್ಟ
೦ ರ ಮಂಗ । ತಿಪ್ಪಾಭಟ್ಟರಿಗೆ । ಆಶ್ರಮಂವ ಕೊಟ್ಟು । ಅಭಿನವ
೦ ಸಚ್ಚಿದಾನಂದ ಭಾರತಿಗಳೆಂಬ ನಾಮಾಂಕಿತವ ಮಾಡಿದರುಂ ।
ಃ ಯಿಂ ಬಗ್ಗೆ ಬಿದನೂರಿಗೆ । ಬರಸಿಕಳುಂಹಿಸ್ತ ಆಶೀರ್ವಾದ ಪ್ರತಿ ।
೦ ಶ್ರೀಮಂತ್ಪರಮಹಂಸ ಪರಿವ್ರಾಜಕಾಚಾರ್ಯ್ಯವರ್ಯ್ಯ ಪದವಾಕ್ಯ ।
೦ ಪ್ರಮಾಣ ಪಾರಾವಾರ ಪಾರಿಣ ಯಂಮನಿಯಂಮಾದ್ಯಷ್ಟಾಂಗ ಯೊ
೦ ಗ ನಿರತರಾದ । ಶ್ರುಂಗೆರಿ ಶ್ರೀ ಸಚ್ಚಿದಾನಂದ ಭಾರತಿ ಸ್ವಾಮಿಂಗಳು ।
ಃ ಕೆಳದಿ ಬಸಪ್ಪನಾಯಂಕರಿಗೆ ಶ್ರೀ ನಾರಾಯಂಣೆ ಸ್ಮರಣೆ ಪೂರ್ವಕವಾಗಿ ।
ಃ ಮಾಡುವ ಆಶೀರ್ವಾದ । ನಾಉ ನಿಂಮ ವಿಚಾರದಿಂದ ಜಪದೆವ ಪೂ
೦ ಜಾ ಸಮಂಯದಲ್ಲೂ ನಿಂಮ ಅಭ್ಯುದಯಂವನ್ನು। ಆಕಾಂಕ್ಷಿಸಿಕೊಂ
೦ ಡು ವೆದಾಂತ ವ್ಯಾಖ್ಯಾನವ ಮಾಡಿಕೊಂಡ್ಯೆಧೆವೆ । ಮಿತ್ತಲಾಗಿ ಶರಿರ
೦ ಸ್ಥಿತಿ ಸ್ವಸ್ಥವಿಲ್ಲದೆ ಶ್ರಮಂವಾಗಿ ಯಿಂರುತ್ತಿದಲ್ಲಿ ದೆಹಧರ್ಮವಿಷಯಂವಾ
೦ ದರಿಂದ ಶಿಷ್ಯ ಸಂಪಾದನವ ಮಾಡಿರಬೆಕೆಂದುಂ ಅಂತಃಕರಣಕೆ ।
೦ ಕಂಡುಂ । ದುಂರ್ಮತಿ ಸಂವತ್ಸರದ ಜೆಷ್ಠ ಬ ೨ ಯುಂ ಶುಕ್ರವಾರ ದಿವಸ ಅ
೦ ವಧಾನದ ತಿರುಂಮಲಭಟ್ಟರ ಮಂಗ ಶಿಪ್ಪಾಭಟ್ಟರಿಗೆ ಆಶ್ರಮಂವ
೦ ಕೊಟ್ಟು ಅಭಿನವಸಚ್ಚಿದಾನಂದ ಭಾರತಿಗಳೆಂಬ ನಾಮಾಂಕಿ
೦ ತಮಂನುಂ ಮಾಡಿದೆವೆ । ಯಿಂ ಧರ್ಮ ಸಂಸ್ಥಾನಉ ಸಕಲ ದೆವ ಬ್ರಾಂ
೦ ಹ್ಮಣರಿಗುಂ ಉಪಯೊಗವಾಗಿ ನಡಮಂಥಾದರಲ್ಲಿ ನಿಂಮ ಹಿರೆರಾ
೦ ರಭ್ಯವಾಗಿ ಪರಿರಕ್ಷಿಸಿ ಬಾಹಂಥಾದರಲ್ಲಿ ನಾಉ ವಿಶೆಷವಾಗಿ ।
೦ ಬರಸುಂಮಂಥಾದೆನದೆ । ಶ್ರುತವಾಗಿರಬೆಕಾಗಿ । ಆಶಿರ್ವದಿಸಿ ।
೦ ಕಳುಂಹಿಸ್ತೆಉ ।

ಶ್ರೀ ಸಚ್ಚಿದಾನಂದ ಭಾರತಿಗಳುಂ ಜಪ ದೇವರ ಪೂಜೆ ಮಾಡುತ್ತ ಬಸವಪ್ಪನಾಯಕರ ಅಭ್ಯುದಯುವನ್ನು ಆಕಾಂಕ್ಷಿಸಿಕೊಂಡಿರುವ ಸಂಗತಿ ಮತ್ತು ಜಗದ್ಗುರುಗಳಿಗೆ ಆರೋಗ್ಯ ಸರಿ ಇಲ್ಲದ್ದರಿಂದ ಶಿಷ್ಯ ಸಂಪಾದನಕ್ಕೋಸ್ಕರ ತಿರುಮಲಭಟ್ಟರ ಮಗ ತಿಪ್ಪಾಭಟ್ಟರಿಗೆ ಸನ್ಯಾಸಾಶ್ರಮ ಕೊಟ್ಟು ಅಭಿನವ ಸಚ್ಚಿದಾನಂದ ಭಾರತಿಗಳೆಂದು ಹೆಸರಿಟ್ಟ ವಿಷಯುಂ, ಮುಂತಾಗಿ, ದುರ್ಮತಿ ಸಂವತ್ಸರ (ಕ್ರಿ.ಶ. ೧೭೪೧)ದ ಮೇಲಿನ ಆಶೀರ್ವಾದ ಪತ್ರಿಕೆಯಿಂದ ಸ್ಪಷ್ಟವಾಗುತ್ತದೆ.

ಶ್ರೀ ಸಚ್ಚಿದಾನಂದ ಭಾರತಿಗಳುಂ ಶಿಷ್ಯಸಂಪಾದನ ಮಾಡಿದ ಸಂಗತಿಯುಂ, ಶೃಂಗೇರಿ ವಿದ್ಯಾರಣ್ಯಪುರದ ವಿದ್ವನ್ಮಹಾಜನಂಗಳು ಇಮ್ಮಡಿ ಬಸವಪ್ಪನಾಯಕರಿಗೆ ಬರಸಿ ಕಳುಹಿದ ಆಶೀರ್ವಾದ ಪತ್ರಿಕೆಯಿಂದ ಖಚಿತವಾಗುತ್ತದೆ.[8] ಶಿಷ್ಯ ಸಂಪಾದನ ಮಾಡಿ, ದುರ್ಮತಿ

8 ಕ. ಸಂ. ೨೦, ದಾ. ೭೮

ಸಂವತ್ಸರದ ಜೇಷ್ಠ ಬ. ೧೦ ಗುರುವಾರ ಒಂಬತ್ತು ತಾಸಿಗೆ ಶ್ರೀ ಸಚ್ಚಿದಾನಂದ ಭಾರತಿಗಳು ಮುಕ್ತರಾದರೆಂದು ಮೇಲಿನ ಆಶೀರ್ವಾದ ಪತ್ರಿಕೆಯಲ್ಲಿ ನಮೂದಿಸಲಾಗಿದೆ.

ಮೇಲ್ಕಾಣಿಸಿದ ದಾಖಲೆಗಳ ಕೂಲಂಕಷ ಅಧ್ಯಯನ ಮಾಡಲಾಗಿ, ಇಮ್ಮಡಿ ಬಸವಪ್ಪನಾಯಕರು ಶೃಂಗೇರಿ ಜಗದ್ಗುರುಗಳು ಮತ್ತು ಅವರ ಮಠಕ್ಕೆ ಸಕಲ ಮರ್ಯಾದೆಗಳನ್ನು ಸಲ್ಲಿಸಿ ಅತ್ಯಂತ ಭಕ್ತಿನಿಷ್ಠೆಯನ್ನು ತೋರಿದ್ದರೆಂದು ತಿಳಿದುಬರುತ್ತದೆ. ಈ ದಿಶೆಯಲ್ಲಿ ಇಮ್ಮಡಿ ಬಸವಪ್ಪನಾಯಕರು ತಮ್ಮ ಪೂರ್ವಿಕರಾದ ಸದಾಶಿವನಾಯಕ, ಹಿರಿಯ ವೆಂಕಟಪ್ಪನಾಯಕ, ವೀರಭದ್ರನಾಯಕ. ಶಿವಪ್ಪನಾಯಕ, ಇಮ್ಮಡಿ ಭದ್ರಪ್ಪನಾಯಕ, ಮೊದಲನೆಯ ಸೋಮಶೇಖರ ನಾಯಕ ಮತ್ತು ಆತನ ಪತ್ನಿ ಚೆನ್ನಮ್ಮಾಜಿ, ಮೊದಲನೆಯ ಬಸವಪ್ಪನಾಯಕ ಮತ್ತು ಇಮ್ಮಡಿ ಸೋಮಶೇಖರ ನಾಯಕರು ಅನುಸರಿಸಿದ ಮಾರ್ಗದಲ್ಲೇ ಮುಂದೆ ಸಾಗಿದರೆಂದು ಖಚಿತವಾಗಿ ಹೇಳಬಹುದು. ಅಷ್ಟೇ ಅಲ್ಲದೆ, ಮುಂದಿನವರಾದ ವೀರಮ್ಮಾಜಿ, ಚೆನ್ನಬಸವಪ್ಪನಾಯಕ ಮತ್ತು ಮುಮ್ಮಡಿ ಸೋಮಶೇಖರ ನಾಯಕ, ಇವರೂ ಕೂಡ ಶೃಂಗೇರಿ ಮಠವನ್ನು ಗೌರವಿಸಿದರು.[9] ವಿಜಯನಗರ ಸಾಮ್ರಾಟರ ನಂತರ, ಶೃಂಗೇರಿ ಮಠವನ್ನು ರಕ್ಷಿಸುವ ನೈತಿಕ ಹೊಣೆ ಕೆಳದಿನೃಪರದ್ದಾಗಿತ್ತೆಂಬುದನ್ನು ಅಳಿದುಳಿದ ದಾಖಲೆಗಳು ಸ್ಪಷ್ಟೀಕರಿಸುತ್ತವೆ.[10] ಶೃಂಗೇರಿ ಮಠದಲ್ಲಿಯ ಆಗುಹೋಗುಗಳ ಬಗ್ಗೆ ಕೆಳದಿ ನೃಪರು ವಿಶೇಷ ಆಸಕ್ತಿ ಹೊಂದಿದವರಾಗಿದ್ದರು,

---

9 A. K. Shastry : *A History of Sringeri* Dharwad, 1982, pp. 27–34

10 ಎ. ಕೆ. ಶಾಸ್ತ್ರಿ : 'ಶೃಂಗೇರಿ ಧರ್ಮಸಂಸ್ಥಾನ, ಶೃಂಗೇರಿ ಮಠ, ೧೯೮೩, ಪು. ೩೬-೪೭